ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



ಕರ್ನಾಟಕ ವಿಧಾನ ಪರಿಷತ್ತು

ನೂರ ನಲವತ್ತೊಂದನೆಯ ಅಧಿವೇಶನ

ಗುರುವಾರ, ದಿನಾಂಕ : 24 ನೇ ಸೆಪ್ಟೆಂಬರ್, 2020

ಸೌಕೂರು ಏತ ನೀರಾವರಿ ಯೋಜನೆಯನ್ನು ಅನುಷ್ಠಾನಗೊಳಿಸುವ ಬಗ್ಗೆ

ಶ್ರೀ ಮೋಹನ್ ಕುಮಾರ್ ಕೊಂಡಜ್ಜಿ(ನಾಮನಿರ್ದೇಶನ ಹೊಂದಿದವರು) –

488 (618) ಮಾನ್ಯ ಜಲಸಂಪನ್ಮೂಲ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ –

(ಅ) ಸೌಕೂರು ಏತ ನೀರಾವರಿ ಯೋಜನೆಯು ವಿಸ್ತ್ರುತ ಯೋಜನಾ ವರದಿಯನ್ನು ತಯಾರಿಸಲಾಗಿದೆಯೇ; (ಹಾಗಿದ್ದಲ್ಲಿ ವರದಿಯ ಪ್ರತಿಯನ್ನು ಒದಗಿಸುವುದು); ಈ ಯೋಜನೆಯ ಅಂದಾಜು ಮೊತ್ತವೆಷ್ಟು; ಈ ಯೋಜನೆಯು ಹೊಂದಿರುವ ಅಚ್ಚುಕಟ್ಟು ಪ್ರದೇಶದ ವಿಸ್ತೀರ್ಣವೆಷ್ಟು; ಈ ಯೋಜನೆಯು ಹಾದು ಹೋಗುವ ಗ್ರಾಮಗಳ ವಿವರವನ್ನು ಒದಗಿಸುವುದು;

(ಆ) ಖಾಸಗಿ ವಿದ್ಯುತ್ ಉತ್ಪಾದನೆಯವರಿಗೆ ಸಹಕರಿಸುವ ಉದ್ದೇಶದಿಂದ ವರಾಹಿ ಬಲದಂಡೆ ಮೂಲ ಯೋಜನೆಯಲ್ಲಿರುವ ಶಂಕರ-ನಾರಾಯಣ, ಅಂಪಾರು, ಕಾವ್ರಾಡಿ, ಹಳ್ನಾಡು ಗ್ರಾಮವನ್ನು ಕೈಬಿಟ್ಟು ಈ ಯೋಜನೆ ರೂಪಿಸಿರುವುದು ನಿಜವೇ; ಇಲ್ಲವಾದಲ್ಲಿ ಸಕಾರಣವನ್ನು ತಿಳಿಸುವುದು;

(ಇ) ವರಾಹಿ ನೀರಾವರಿ ಯೋಜನೆಯು ಪ್ರಾರಂಭವಾಗಿ 40 ವರ್ಷಗಳೇ ಆದರೂ ಶಂಕರನಾರಾಯಣ, ಅಂಪಾರು, ಕಾವಾಡಿ, ಹಳ್ನಾಡು ಗ್ರಾಮಗಳ ಭೂಸ್ವಾಧೀನ ಪ್ರಕ್ರಿಯೆ ಪೂರ್ಣವಾಗದಿರಲು ಕಾರಣವೇನು; ಯೋಜನೆಗೆ ಅಗತ್ಯವಾದ ಭೂಮಿ ಎಷ್ಟು; ಪ್ರಸ್ತುತ ಭೂಸ್ವಾಧೀನ ಪಡಿಸಲಾದ ಭೂಮಿ ಎಷ್ಟು; ಭೂಸ್ವಾಧೀನ ಪ್ರಕ್ರಿಯೆಗೆ ಬಾಕಿ ಇರುವ ಭೂಮಿ ಎಷ್ಟು; (ಗ್ರಾಮವಾರು ವಿವರ ನೀಡುವುದು) ಈ ಭೂಸ್ವಾಧೀನ ಪ್ರಕ್ರಿಯೆ ಮತ್ತು ಕಾಲುವೆಯ ಕಾಮಗಾರಿಯನ್ನು ಪೂರ್ಣಗೊಳಿಸಲು ಸರಕಾರದ ಕಾಲಮಿತಿ ಯಾವುದು?